## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 399 (437) |
| ಸದಸ್ಯರ ಹೆಸರು | | ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 09-03-2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುವ ಪ್ರಥಮ ದರ್ಜೆ ಕಾಲೇಜುಗಳ ಒಟ್ಟು ಸಂಖ್ಯೆ ಎಷ್ಟು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಗೊಳಪಡುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಸಂಖ್ಯೆ: 20 |
| ಆ) | ಪಾಲಿಕೆ ವ್ಯಾಪ್ತಿಯ ಕಾಲೇಜುಗಳಿಗೆ ಅನುಮೋದನೆ ನೀಡಿರುವ ಖಾಯಂ ಉಪನ್ಯಾಸಕರ ಹುದ್ದೆಗಳ ಸಂಖ್ಯೆ ಎಷ್ಟು; ಪ್ರಸ್ತುತ ಅನುಮೋದಿತ ಖಾಯಂ ಉಪನ್ಯಾಸಕರ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; (ಕಾಲೇಜುವಾರು ವಿವರ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಗೊಳಪಡುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಮಂಜೂರಾದ ಖಾಯಂ ಉಪನ್ಯಾಸಕರ ಹುದ್ದೆಗಳ ಸಂಖ್ಯೆ:841. ಈ ಪೈಕಿ ಖಾಲಿ ಇರುವ ಉಪನ್ಯಾಸಕರ ಸಂಖ್ಯೆ:140.<br><br>(ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ) |
| ಇ) | ಅನುಮೋದಿತ ಖಾಯಂ ಉಪನ್ಯಾಸಕರುಗಳ ಹುದ್ದೆಗಳು ನಿವೃತ್ತಿಯಿಂದ ವರ್ಗಾವಣೆಯಿಂದ ತೆರವಾಗಿದ್ದಲ್ಲಿ ಖಾಲಿ ಹುದ್ದೆಗಳನ್ನು ತುಂಬಲು ಪಾಲಿಕೆ ಕೈಗೊಂಡ ಕ್ರಮವೇನು; | **ಪ್ರಾಂಶುಪಾಲರು:**<br>ಸರ್ಕಾರದ ಆದೇಶ ಸಂಖ್ಯೆ:ಇಡಿ/121/ಡಿಸಿಇ/2018, ದಿ:11.06.2019 ರಲ್ಲಿ ಒಟ್ಟು-310 ಪ್ರಾಂಶುಪಾಲರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅನುಮತಿ ನೀಡಲಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ದಿನಾಂಕ:10.02.2020ರ ಅಧಿಸೂಚನೆ ಸಂಖ್ಯೆ:ಇಡಿ/121/ಡಿಸಿಇ/2018 ರಲ್ಲಿ ಕರಡು ನಿಯಮಗಳನ್ನು ಹೊರಡಿಸಲಾಗಿದೆ. ಅಂತಿಮ ನಿಯಮಗಳನ್ನು ಹೊರಡಿಸಿದ ನಂತರ ಪ್ರಾಂಶುಪಾಲರ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು.<br><br>**ಸಹಾಯಕ ಪ್ರಾಧ್ಯಾಪಕರು:**<br>ದಿನಾಂಕ:03.08.2019 ಸಂಖ್ಯೆ:ಇಡಿ/185/ಡಿಸಿಇ/2018 ರಲ್ಲಿ ಒಟ್ಟು-1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಲಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ದಿನಾಂಕ:10.02.2020ರ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019 (ಭಾಗ-3)ರಲ್ಲಿ ಕರಡು ವಿಶೇಷ ನೇಮಕಾತಿ ನಿಯಮಗಳನ್ನು ಹೊರಡಿಸಲಾಗಿದೆ. ಅಂತಿಮ ವಿಶೇಷ ನೇಮಕಾತಿ ನಿಯಮಗಳನ್ನು ಹೊರಡಿಸಿದ ನಂತರ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು (ಕಾರ್ಯಭಾರಕ್ಕನು-ಗುಣವಾಗಿ) ಭರ್ತಿ ಮಾಡಲು ಕ್ರಮವಹಿಸಲಾಗುವುದು. |

| | | |
|---|---|---|
| | | **ದೈಹಿಕ ಶಿಕ್ಷಣ ಬೋಧಕರು ಮತ್ತು ಗ್ರಂಥಪಾಲಕರು:-**<br><br>ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ದೈಹಿಕ ಶಿಕ್ಷಣ ಬೋಧಕರ ಹಾಗೂ ಗ್ರಂಥಪಾಲಕರ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. ಆರ್ಥಿಕ ಇಲಾಖೆಯಿಂದ ಸಹಮತಿ ದೊರೆತ ನಂತರ ನೇಮಕಾತಿ ಮಾಡಿಕೊಳ್ಳಲು ಕ್ರಮವಹಿಸಲಾಗುವುದು. |
| ಈ) | ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಅರ್ಹ ಉಪನ್ಯಾಸಕರನ್ನು ನೇಮಕ ಮಾಡಿಕೊಂಡಿದ್ದರೆ, ಅವರುಗಳ ಸೇವಾ ಸಕ್ರಮಾತಿ ಬಗ್ಗೆ ಪಾಲಿಕೆ ಕೈಗೊಂಡಿರುವ ಕ್ರಮಗಳೇನು; | ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಯಾವುದೇ ಉಪನ್ಯಾಸಕರನ್ನು ನೇಮಕ ಮಾಡಿಕೊಂಡಿರುವುದಿಲ್ಲ. ಆದ್ದರಿಂದ ಅವರುಗಳ ಸೇವಾ ಸಕ್ರಮಾತಿ ಪ್ರಶ್ನೆ ಉದ್ಭವಿಸುವುದಿಲ್ಲ. |

ಇಡಿ 65 ಡಿಸಿಇ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

# ಅನುಬಂಧ

| Sl. No. | College Name | S | W | V |
|---|---|---|---|---|
| 1 | MAC, BANGALORE | 98 | 78 | 20 |
| 2 | GAC, BANGALORE | 61 | 50 | 11 |
| 3 | RCC, BANGALORE | 46 | 34 | 12 |
| 4 | VHD, BANGALORE | 77 | 56 | 21 |
| 5 | GSC, BANGALORE | 97 | 89 | 8 |
| 6 | MSC, BANGALORE | 101 | 86 | 15 |
| 7 | GFC, VIJAYANAGAR, B'LORE | 60 | 54 | 6 |
| 8 | GFC, K R PURAM BANGALORE | 55 | 51 | 4 |
| 9 | GFC, R T NAGAR B'LORE | 30 | 25 | 5 |
| 10 | GFC, RAJAJINAGARA, B'LORE | 19 | 16 | 3 |
| 11 | GFC, JAYANAGAR, BANGALORE | 14 | 13 | 1 |
| 12 | GFC, MALLESWARAM, B'LORE | 22 | 19 | 3 |
| 13 | GFC, PEENYA, B'LORE | 12 | 8 | 4 |
| 14 | GFC, FRAZERTOWN, B'LORE | 13 | 11 | 2 |
| 15 | GFC, YALAHANKA, B'LORE | 47 | 43 | 4 |
| 16 | GFC, HSR LAYOUT, B'LORE | 18 | 15 | 3 |
| 17 | GFC, KENGERI, BANGALORE | 22 | 20 | 2 |
| 18 | GFC, VARTHUR, B'LORE | 21 | 16 | 5 |
| 19 | GFC, KADUGODI, BANGALORE | 16 | 14 | 2 |
| 20 | GCW, CHAMARAJAPETE, B'LORE | 12 | 3 | 9 |
| | **TOTAL** | **841** | **701** | **140** |